# ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 680 |
| 2 | ಸದಸ್ಯರ ಹೆಸರು | : | ಶ್ರೀ ಸುನೀಲ್ ಸುಬ್ರಮಣಿ ಹೆಚ್.ಪಿ (ಸ್ಥಳಿಯ ಸಂಸ್ಥೆಗಳ ಕ್ಷೇತ್ರ |
| 3 | ಉತ್ತರಿಸುವ ದಿನಾಂಕ | : | 12-03-2020 |
| 4 | ಉತ್ತರಿಸುವವರು | : | ಮಾನ್ಯ ಮುಖ್ಯಮಂತ್ರಿಯವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಹೈ-ಟೆನ್ಷನ್ ವಿದ್ಯುತ್ ತಂತಿಗಳ ಕೆಳಗೆ ಕಟ್ಟಡಗಳನ್ನು ಕಟ್ಟಲು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು ಅನುಮತಿಯನ್ನು ನೀಡಿದೆಯೇ; ನೀಡಿದ್ದಲ್ಲಿ ಅನುಮತಿಯನ್ನು ನೀಡಲು ಇರುವ ಕಾನೂನು / ನಿಯಮಗಳ ವಿವರಗಳನ್ನು ನೀಡುವುದು; | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಹಾದುಹೋಗಿರುವ ಹೈ-ಟೆನ್ಷನ್ ವಿದ್ಯುತ್ ತಂತಿಗಳ ಕೆಳಗೆ ಕಟ್ಟಡಗಳನ್ನು ಕಟ್ಟಲು ಯಾವುದೇ ಅನುಮತಿ ನೀಡಿರುವುದಿಲ್ಲ. |
| ಆ | ನಿಯಮ ಮೀರಿ ಕಟ್ಟಡಗಳನ್ನು ಕಟ್ಟಲು ಅನುಮತಿಯನ್ನು ನೀಡಿರುವ ಅಧಿಕಾರಿಗಳ ಮೇಲೆ ಯಾವ ಕ್ರಮ ಕೈಗೊಳ್ಳಲಾಗುವುದು; ಕ್ರಮ ಕೈಗೊಂಡ ಪ್ರಕರಣಗಳಿದ್ದಲ್ಲಿ ವಿವರಗಳನ್ನು ನೀಡುವುದು; | ಆಯುಕ್ತರು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ರವರ ಕಛೇರಿ ಆದೇಶ ಸಂಖ್ಯೆ:ಹೆನಿನಯೋ/ಪಿಆರ್/158/19-20, ದಿನಾಂಕ: 24-06-2019ರಂತೆ ಹೈ-ಟೆನ್ಷನ್ ವಿದ್ಯುತ್ ಮಾರ್ಗಗಳ ಕೆಳಭಾಗದಲ್ಲಿ ಕಟ್ಟಡ ನಿರ್ಮಾಣ ಕಾರ್ಯಗಳು ನಡೆಯುತ್ತಿದ್ದಲ್ಲಿ ಕೂಡಲೇ ಸ್ಥಗಿತಗೊಳಿಸಲು ಮತ್ತು ಇನ್ನು ಮುಂದೆ ವಿದ್ಯುತ್ ಅವಘಡಗಳಿಂದ ಪ್ರಾಣಹಾನಿ ಉಂಟಾದಲ್ಲಿ ಸಂಬಂಧಪಟ್ಟ ವಿಭಾಗ ಹಾಗೂ ಉಪ ವಿಭಾಗದ ಅಭಿಯಂತರರನ್ನೇ ನೇರ ಹೊಣೆಗಾರರನ್ನಾಗಿ ಮಾಡಲಾಗುವುದೆಂದು ಆದೇಶ ಹೊರಡಿಸಲಾಗಿರುತ್ತದೆ. ಸದರಿ ಆದೇಶದ ಪ್ರತಿಯನ್ನು ಅನುಬಂಧದಲ್ಲಿ ನೀಡಲಾಗಿದೆ |
| ಇ | ಬೆಂಗಳೂರು ನಗರದಲ್ಲಿ ನಿಯಮ ಮೀರಿ ಹೈ-ಟೆನ್ಷನ್ ವಿದ್ಯುತ್ ತಂತಿ ಕೆಳಗೆ ಕಟ್ಟಿರುವ ಕಟ್ಟಡಗಳನ್ನು ತೆರವುಗೊಳಿಸಲು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ತೆಗೆದುಕೊಂಡ ಕ್ರಮಗಳೇನು; (ವಿವರ ನೀಡುವುದು) | |
| ಈ | ನಿಯಮ ಮೀರಿ ಹೈ-ಟೆನ್ಷನ್ ವಿದ್ಯುತ್ ತಂತಿ ಕೆಳಗೆ ಕಟ್ಟಿರುವ ಕಟ್ಟಡಗಳನ್ನು ತೆರವುಗೊಳಿಸಲು ಇಂಧನ ಇಲಾಖೆಯು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯೊಂದಿಗೆ ಯಾವುದಾದರೂ ಪತ್ರ ವ್ಯವಹಾರ ಅಥವಾ ಸಭೆಯನ್ನು ನಡೆಸಿದೆಯೇ? (ವಿವರ ನೀಡುವುದು) | ಬೆಸ್ಕಾಂ, ಕೆಪಿಟಿಸಿಎಲ್ ಮತ್ತು ಪಾಲಿಕೆಯ ಉನ್ನತ ಮಟ್ಟದ ಅಧಿಕಾರಿಗಳ ಸಭೆ ನಡೆಸಲಾಗಿದ್ದು ಸಭೆಯ ಸೂಚನೆಯಂತೆ ಅಧಿಕಾರಿಗಳ ಜೊತೆ ಹೈ-ಟೆನ್ಷನ್ ವಿದ್ಯುತ್ ತಂತಿಗಳ ಕೆಳಗೆ ಕಟ್ಟಿರುವ ಕಟ್ಟಡಗಳನ್ನು ತೆರವುಗೊಳಿಸುವ ಸಂಬಂಧ ಮೊದಲ ಹಂತದಲ್ಲಿ ಕಟ್ಟಡಗಳನ್ನು ಗುರುತಿಸುವ ಪ್ರಕ್ರಿಯೆಯನ್ನು ಕೆಪಿಟಿಸಿಎಲ್ ಮತ್ತು ಬೆಸ್ಕಾಂ ಅಧಿಕಾರಿಗಳೊಂದಿಗೆ ಜಂಟಿಯಾಗಿ ಕೈಗೊಂಡಿದ್ದು, ಗುರುತಿಸಲಾದ ಕಟ್ಟಡಗಳು ಈ ಕೆಳಕಂಡಂತಿರುತ್ತದೆ. |

| ಕ್ರ. ಸಂ | ವಲಯ | ಗುರುತಿಸಲಾದ ಕಟ್ಟಡಗಳು |
|---|---|---|
| 1 | ಪೂರ್ವ | 381 |

<table>
<tr>
<td></td>
<td></td>
<td>
<table>
<tr><td>2</td><td>ದಕ್ಷಿಣ</td><td>200</td></tr>
<tr><td>3</td><td>ದಾಸರಹಳ್ಳಿ</td><td>135</td></tr>
<tr><td>4</td><td>ರಾಜರಾಜೇಶ್ವರಿ ನಗರ</td><td>633</td></tr>
<tr><td>5</td><td>ಯಲಹಂಕ</td><td>320</td></tr>
</table>
ಉಳಿದ ವಲಯಗಳಾದ ಪಶ್ಚಿಮ, ಮಹದೇವಪುರ ಮತ್ತು ಬೊಮ್ಮನಹಳ್ಳಿ ವಲಯದ ಜಂಟಿ ತಪಾಸಣೆ ಕಾರ್ಯವು ಪೂರ್ಣಗೊಂಡ ನಂತರ ಪಾಲಿಕೆಯ ಎಲ್ಲಾ 08 ವಲಯಗಳ ಹೈ–ಟೆನ್ಷನ್ ವಿದ್ಯುತ್ ತಂತಿಗಳ ಕೆಳಗೆ ನಿರ್ಮಿಸಿ ಗುರುತಿಸಿರುವ ಕಟ್ಟಡಗಳ ಸ್ವತ್ತಿನ ಮಾಲೀಕರ ವಿವರಗಳನ್ನು ಪಡೆದು ತದನಂತರ ಕೆ.ಎಂ.ಸಿ. ಕಾಯ್ದೆಯಂತೆ ತೆರವುಗೊಳಿಸಲು ಕ್ರಮಕೈಗೊಳ್ಳಲಾಗುತ್ತಿದೆ.
</td>
</tr>
</table>

**ಸಂಖ್ಯೆ: ನಅಇ 85 ಎಂಎನ್‌ಯು 2020**

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ

ಡಿಸೆಂ 2015 - 1



# ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ

**ಆಯುಕ್ತರು ರವರ ಕಛೇರಿ, ನರಸಿಂಹರಾಜ ವೃತ್ತ, ಬೆಂಗಳೂರು – 560 002.**

ಸಂಖ್ಯೆ: ಹೆನಿನಯೋ/ಪಿಆರ್/ 158 /19-20 ದಿನಾಂಕ: 24-06-2019

## ಕಛೇರಿ ಆದೇಶ

ವಿಷಯ:- ಪಾಲಿಕೆಯ ವ್ಯಾಪ್ತಿಯಲ್ಲಿ ಅಧಿಕ ಸಾಮರ್ಥ್ಯದ ಹೈ-ಟೆನ್ಷನ್ ವಿದ್ಯುತ್ ತಂತಿಗಳು ಹಾದುಹೋಗಿರುವ ಮಾರ್ಗಗಳ ಕೆಳಭಾಗದಲ್ಲಿ ಕಟ್ಟಡ ನಿರ್ಮಾಣಗಳನ್ನು ತಡೆಯುವುದು ಹಾಗೂ ಮಂಜೂರಾತಿ ಪಡೆದು, ಮಂಜೂರಾತಿ ನಕ್ಷೆ ಉಲ್ಲಂಘಿಸಿ ನಿರ್ಮಾಣ ಮಾಡುವ ಕಟ್ಟಡಗಳು, ಕಟ್ಟಡಗಳ ಸುರಕ್ಷತೆ ಹಾಗೂ ಗುಣಮಟ್ಟದ ಮೇಲ್ವಿಚಾರಣೆ ಕೈಗೊಂಡು ಮಾಸಿಕ ವರದಿಗಳನ್ನು ಸಲ್ಲಿಸುವ ಬಗ್ಗೆ.

ಉಲ್ಲೇಖ:-
1. ಈ ಕಛೇರಿ ಸಮ ಸಂಖ್ಯೆಯ ಕಛೇರಿ ಆದೇಶ ಪತ್ರದ ದಿನಾಂಕ: 29-06-2015.
2. ಈ ಕಛೇರಿ ಸಮ ಸಂಖ್ಯೆಯ ಕಛೇರಿ ಆದೇಶ ಪತ್ರದ ದಿನಾಂಕ: 20-10-2016.
3. ಈ ಕಛೇರಿ ಸಂಖ್ಯೆಯ ಆಂತರಿಕ ಕಛೇರಿ ಟಿಪ್ಪಣಿ ಪತ್ರದ ದಿನಾಂಕ:24-07-2018.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖ (1) ರಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ನಿಯಮಾವಳಿಗಳಿಗೆ ವಿರುದ್ಧವಾಗಿ ಅಗತ್ಯ ಸುರಕ್ಷತೆ, ಗುಣಮಟ್ಟ ಕಾಪಾಡಿಕೊಳ್ಳದೇ ಕಟ್ಟಡ ನಿರ್ಮಾಣಗಳನ್ನು ಕೈಗೊಳ್ಳುತ್ತಿರುವ ಬಗ್ಗೆ, ಪಾಲಿಕೆ ವ್ಯಾಪ್ತಿಯಲ್ಲಿ ಮಂಜೂರಾತಿ ನಕ್ಷೆಗೆ ವ್ಯತಿರಿಕ್ತವಾಗಿ ನಿರ್ಮಿಸುವ ಅಥವಾ ಅನಧಿಕೃತವಾಗಿ ನಿರ್ಮಿಸುವ ಕಟ್ಟಡ ನಿರ್ಮಾಣದ ಉಲ್ಲಂಘನೆಗಳನ್ನು ತಡೆಯುವ ನಿಟ್ಟಿನಲ್ಲಿ ಉಪವಿಭಾಗಗಳ ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು ಮತ್ತು ಕಾರ್ಯಪಾಲಕ ಅಭಿಯಂತರರಿಗೆ ಅಧಿಕಾರ ಪ್ರತ್ಯಾಯೋಜನೆ ನೀಡಿ, ಅನಧಿಕೃತ/ಉಲ್ಲಂಘಿತ ನಿರ್ಮಾಣಗಳ ಬಗ್ಗೆ ಕ್ರಮ ಕೈಗೊಳ್ಳಲು ಆದೇಶಿಸಲಾಗಿರುತ್ತದೆ.

ಉಲ್ಲೇಖ (2) ರಲ್ಲಿ ಪ್ರಾಮುಖ್ಯ ಸೂಚನೆಗಳನ್ನು ನೀಡಿ, ಮಂಜೂರಾತಿ ನಕ್ಷೆಗೆ ವಿರುದ್ಧವಾಗಿ / ಅನಧಿಕೃತವಾಗಿ ನಿರ್ಮಾಣವಾಗುತ್ತಿರುವ ಕಟ್ಟಡಗಳ ವಿವರಗಳು, ನೀಡಲಾದ ನೋಟೀಸ್ ವಿವರಗಳು ಹಾಗೂ ಕೈಗೊಂಡ ಕ್ರಮಗಳ ವಿವರಗಳನ್ನೊಳಗೊಂಡ ಪ್ರತ್ಯೇಕ ವಹಿಯನ್ನು (Register) ಕಡ್ಡಾಯವಾಗಿ ನಿರ್ವಹಿಸಿ, ಅಂಕಿ ಅಂಶಗಳು ಹಾಗೂ ನೀಡಲಾದ ನೋಟೀಸ್ ಪ್ರತಿಗಳೊಂದಿಗೆ ಪ್ರತಿವಾರ ಸಂಬಂಧಪಟ್ಟ ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು ಕಾರ್ಯಪಾಲಕ ಅಭಿಯಂತರರಿಗೆ ಸಲ್ಲಿಸಲು ಹಾಗೂ ಸಂಬಂಧಪಟ್ಟ ಕಾರ್ಯಪಾಲಕ ಅಭಿಯಂತರರು ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರಿಂದ ಸ್ವೀಕರಿಸಲ್ಪಟ್ಟ ಅಂಕಿ ಅಂಶಗಳು ಹಾಗೂ ನೀಡಲಾದ ನೋಟೀಸ್ ಪ್ರತಿಗಳೊಂದಿಗೆ 15 ದಿನಗಳಿಗೊಮ್ಮೆ ಪ್ರಧಾನ ಅಭಿಯಂತರರವರಿಗೆ ಕಡ್ಡಾಯವಾಗಿ ನಮೂನೆ ರೀತ್ಯಾ ಸಲ್ಲಿಸಲು ಆದೇಶಿಸಲಾಗಿರುತ್ತದೆ.

ಇತ್ತೀಚೆಗೆ ಸೂರತ್‌ನ ಕೋಚಿಂಗ್ ಸೆಂಟರ್‌ನಲ್ಲಿ ಸಂಭವಿಸಿದ ಅಗ್ನಿ ದುರಂತದಂತಹ ದುರ್ಘಟನೆಗಳು ಬೆಂಗಳೂರಿನಲ್ಲಿ ಸಂಭವಿಸುವ ಮುನ್ನ ಮುನ್ನೆಚರಿಕೆಯ ಕ್ರಮಗಳನ್ನು ಕೈಗೊಳ್ಳುವುದು ಅವಶ್ಯವಿರುತ್ತದೆ. ಆದುದರಿಂದ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಸಾರ್ವಜನಿಕ, ಶೈಕ್ಷಣಿಕ ಮತ್ತು ಆಸ್ಪತ್ರೆ ಮತ್ತು ಇನ್ನಿತರೆ ಉಪಯೋಗದ ಕಟ್ಟಡಗಳಲ್ಲಿ ಅಗ್ನಿ ಸುರಕ್ಷತಾ ಕ್ರಮಗಳನ್ನು ಅಳವಡಿಸಿರುವುದನ್ನು ಉಪವಿಭಾಗದ ಸಹಾಯಕ ಕಾರ್ಯಪಾಲಕ ಅಭಿಯಂತರರು ಕಡ್ಡಾಯವಾಗಿ ಖಾತರಿಪಡಿಸಿಕೊಳ್ಳಲು ಸೂಚಿಸಿದೆ.

ಇದೇ ರೀತಿ ಬೆಂಗಳೂರು ನಗರದಲ್ಲಿ ಅಧಿಕ ವಿದ್ಯುತ್ ವಾಹಕ ಮಾರ್ಗಗಳ ಕೆಳಭಾಗದಲ್ಲಿ ನಿರ್ಮಿಸಿರುವ ಅನಧಿಕೃತ ಕಟ್ಟಡಗಳಿಂದಾಗಿ ಸಾವು ನೋವುಗಳಾಗುವ ಸಂಭವವಿದ್ದು, ಹೈ-ಟೆನ್ಷನ್ ವಿದ್ಯುತ್ ಮಾರ್ಗಗಳ ಕೆಳಭಾಗದಲ್ಲಿ ಕಟ್ಟಡ ನಿರ್ಮಾಣ ಕಾರ್ಯಗಳು ನಡೆಯುತ್ತಿದ್ದಲ್ಲಿ ಕೂಡಲೇ ಸ್ಥಗಿತಗೊಳಿಸಲು ಮತ್ತು ಇನ್ನುಮುಂದೆ ವಿದ್ಯುತ್ ಅವಘಡಗಳಿಂದಾಗಿ ಪ್ರಾಣಹಾನಿ ಉಂಟಾದಲ್ಲಿ ಸಂಬಂಧಪಟ್ಟ ಅಧಿಕಾರಿಗಳನ್ನೇ ನೇರ ಹೊಣೆಗಾರರನ್ನಾಗಿ ಜವಾಬ್ದಾರಿ ನಿಗಧಿಪಡಿಸಲಾಗಿದೆ. ಈ ನಿಟ್ಟಿನಲ್ಲಿ ಉಪವಿಭಾಗಗಳ ಸಹಾಯಕ ಕಾರ್ಯಪಾಲಕ ಅಭಿಯಂತರರು ನಿರ್ದಾಕ್ಷಿಣ್ಯ ಕ್ರಮ ಜರುಗಿಸುವುದು ಮತ್ತು ಕೈಗೊಂಡ ಕ್ರಮವನ್ನು ಪರಿಶೀಲಿಸಿ ಕಾಲಕಾಲಕ್ಕೆ ಸೂಚನೆಗಳನ್ನು ನೀಡಲು ವಲಯಗಳ ಮುಖ್ಯ ಅಭಿಯಂತರರು ರವರಿಗೆ ಆದೇಶಿಸಿದೆ.



ಇನ್ನು ಮುಂದೆ ಮುನ್ನಚರಿಕೆ ಕ್ರಮ ತೆಗೆದುಕೊಳ್ಳದೇ ಆಗಬಹುದಾದ ಅವಘಡಗಳಿಂದ ಸಾರ್ವಜನಿ... ಪ್ರಾಣ ಹಾನಿ ಉಂಟಾದಲ್ಲಿ ಅಂತಹ ಅನಾಹುತಗಳಿಗೆ ಸಂಬಂಧಪಟ್ಟ ವಿಭಾಗ ಹಾಗೂ ಉಪವಿಭಾಗದ ಅಭಿಯಂತರರನ್ನು ನೇರ ಹೊಣೆಗಾರರನ್ನಾಗಿಸಲಾಗುವುದು ಹಾಗೂ ಮೇಲ್ಕಂಡಂತೆ ನೀಡಲಾದ ಸೂಚನೆಗಳನ್ನು ಪಾಲಿಸಲು ನಿರ್ಲಕ್ಷ್ಯ ವಹಿಸಿದಲ್ಲಿ ಸಂಬಂಧಪಟ್ಟ ವಿಭಾಗ ಹಾಗೂ ಉಪವಿಭಾಗದ ಅಭಿಯಂತರರ ವಿರುದ್ಧ ಸಿ.ಸಿ.ಎ. ನಿಯಮಾವಳಿಗಳ ರೀತ್ಯಾ ಕರ್ತವ್ಯ ಲೋಪವೆಂದು ಪರಿಗಣಿಸಿ ಶಿಸ್ತಿನ ಕ್ರಮ ಜರುಗಿಸಲಾಗುವುದೆಂದು ಆದೇಶಿಸಿದೆ.

ಆಯುಕ್ತರು 24/4/19

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ.

<u>ಯಥಾ ಪ್ರತಿಯನ್ನು ಮಾಹಿತಿಗಾಗಿ ಹಾಗೂ ಸೂಕ್ತ ಕ್ರಮಕ್ಕಾಗಿ ಕಳುಹಿಸಿದೆ.</u>

1) ಪೂಜ್ಯ ಮಹಾಪೌರರ ರವರ ಅವಗಾಹನೆಗೆ ತರಲು ಆಪ್ತ ಶಾಖೆಗೆ ಕಳುಹಿಸಿದೆ.
2) ಮಾನ್ಯ ಉಪ ಮಹಾಪೌರರು ರವರ ಅವಗಾಹನೆಗೆ ತರಲು ಆಪ್ತ ಶಾಖೆಗೆ ಕಳುಹಿಸಿದೆ.
3) ವಿಶೇಷ ಆಯುಕ್ತರು (ಯೋಜನೆಗಳು) ರವರ ಮಾಹಿತಿಗಾಗಿ.
4) ಅಪರ ಆಯುಕ್ತರು (ಆಡಳಿತ) ರವರ ಮಾಹಿತಿಗಾಗಿ
5) ಪ್ರಧಾನ ಅಭಿಯಂತರರು, ರವರ ಮಾಹಿತಿಗಾಗಿ.
6) ಅಪರ / ಜಂಟಿ ಆಯುಕ್ತರು – ಪೂರ್ವ ವಲಯ / ಪಶ್ಚಿಮ ವಲಯ / ದಕ್ಷಿಣ ವಲಯ / ಮಹದೇವಪುರ ವಲಯ / ಯಲಹಂಕ ವಲಯ / ದಾಸರಹಳ್ಳಿ ವಲಯ / ಬೊಮ್ಮನಹಳ್ಳಿ ವಲಯ / ರಾಜರಾಜೇಶ್ವರಿ ನಗರ ವಲಯ ರವರುಗಳಿಗೆ
7) ಜಂಟಿ ಆಯುಕ್ತರು (ಆರೋಗ್ಯ ಮತ್ತು ಕಂದಾಯ) ರವರಿಗೆ
8) ಅಪರ ನಿರ್ದೇಶಕರು (ನಗರ ಯೋಜನೆ) ರವರಿಗೆ
9) ಮುಖ್ಯ ಅಭಿಯಂತರರು – ಪೂರ್ವ ವಲಯ / ಪಶ್ಚಿಮ ವಲಯ / ದಕ್ಷಿಣ ವಲಯ / ಮಹದೇವಪುರ ವಲಯ / ಯಲಹಂಕ ವಲಯ / ದಾಸರಹಳ್ಳಿ ವಲಯ / ಬೊಮ್ಮನಹಳ್ಳಿ ವಲಯ / ರಾಜರಾಜೇಶ್ವರಿ ನಗರ ವಲಯ ರವರುಗಳಿಗೆ
10) ಮುಖ್ಯ ಅಭಿಯಂತರರು (ಬೃಹತ್-ನೀರುಗಾಲುವೆ / ಘನತ್ಯಾಜ್ಯ ನಿರ್ವಹಣೆ / ಟಿವಿಸಿಸಿ / ಕೆರೆಗಳು / ರಸ್ತೆ ಮೂಲಭೂತ ಸೌಕರ್ಯ) ರವರಿಗೆ
11) ಸಹಾಯಕ ನಿರ್ದೇಶಕರು – ನಗರ ಯೋಜನೆ – ಪೂರ್ವ / ಪಶ್ಚಿಮ / ದಕ್ಷಿಣ / ಮಹದೇವಪುರ / ಯಲಹಂಕ / ದಾಸರಹಳ್ಳಿ / ಬೊಮ್ಮನಹಳ್ಳಿ / ರಾಜರಾಜೇಶ್ವರಿ ನಗರ ವಲಯ ರವರುಗಳಿಗೆ
12) ಸಲಹೆಗಾರರು, ಮಾಹಿತಿ ತಂತ್ರಜ್ಞಾನ ರವರಿಗೆ ವೆಬ್‌ಸೈಟ್‌ನಲ್ಲಿ ಪ್ರಚುರ ಪಡಿಸಲು ಕಳುಹಿಸಿದೆ.
13) ಕಛೇರಿ ಕಡತಕ್ಕೆ